# ಭಿತ್ತಿ ಚಿತ್ರಗಳಲ್ಲಿ ಐತಿಹಾಸಿಕ ವ್ಯಕ್ತಿಗಳು

ಡಾ|| ಜ್ಯೋತ್ಸ್ನಾ ಕಾಮತ

ಛಾಯಾಗ್ರಹಣದ ಸವಲತ್ತುಗಳು ಭಾರತದಲ್ಲಿ ಲಭ್ಯವಾಗುವ ತನಕ ರಾಜ-ಮಹಾರಾಜರು ಅನುಕೂಲವಿದ್ದ ಇತರರೆಲ್ಲ ತಮ್ಮನ್ನು ರೂಪಿಸಿಕೊಳ್ಳಲು ಚಿತ್ರಕಲೆಗೇ ಮೊರೆ ಹೋಗಬೇಕಾಗಿತ್ತು. ಗತಕಾಲದ ಪ್ರಭಾವಶಾಲಿ ವ್ಯಕ್ತಿಗಳ ಅಧ್ಯಯನಕ್ಕೆ ತೈಲಚಿತ್ರ, ಜಲವರ್ಣಚಿತ್ರಗಳನ್ನು ಬಳಸಿಕೊಂಡರೂ ಸಂಶೋಧಕರು ಭಿತ್ತಿ ಚಿತ್ರಗಳತ್ತ ಹೆಚ್ಚಾಗಿ ಲಕ್ಷ್ಯ ಹರಿಸಿದಂತಿಲ್ಲ. ಬಹುಶಃ ಇದಕ್ಕೆ ಮುಖ್ಯ ಕಾರಣ ಬಹುಸಂಖ್ಯಾತ ಚಿತ್ರಗಳನ್ನು ಹೆಸರಿಸದೆ ಇದುದರಿಂದ, ಅವುಗಳನ್ನು ಗುರುತಿಸುವದು ಸುಲಭವಲ್ಲದಿರಬಹುದು. ಆದರೆ ಶಾಸನ, ತಾಮ್ರಪಟ, ಶಿಲ್ಪಗಳಂತಹ ಪೂರಕವಾಗಿರುವ ಮಾಹಿತಿಯನ್ನು ಅವಲಂಬಿಸಿದರೆ, ಐತಿಹಾಸಿಕ ವ್ಯಕ್ತಿಗಳನ್ನು ಗುರುತಿಸುವುದು ಅಸಾಧ್ಯವೇನಲ್ಲ. ಕರ್ನಾಟಕ ರಾಜ್ಯದ ಉದ್ದಗಲಕ್ಕೆ ಇರುವ ಭಿತ್ತಿ ಚಿತ್ರಗಳಲ್ಲಿ ಮೂಡಿಸಿರುವ ಅಂಥ ಕೆಲ ವ್ಯಕ್ತಿಗಳ ಕಿರು ಪರಿಚಯ ಇಲ್ಲಿದೆ.

ಕರ್ನಾಟಕವನ್ನಾಳಿದ ಶ್ರೇಷ್ಠ ಅರಸರಲ್ಲಿ ಒಬ್ಬನಾದ ಚಾಲುಕ್ಯ ಇಮ್ಮಡಿ ಪುಲಿಕೇಶಿ (ಕ್ರಿ.ಶ. ೭ನೇ ಶತಮಾನ)ಯ ರಾಜ್ಯ, ನರ್ಮದಾ ನದಿಯವರೆಗೆ ಹಬ್ಬಿದ್ದರಿಂದ, ಅಜಂತಾದ ಪ್ರಥಮ ಗುಹೆಯಲ್ಲಿ ಅವನನ್ನು ಚಿತ್ರಿಸಲಾಗಿದೆ, ಎಂದು ಒಂದು ಅಭಿಪ್ರಾಯವಿದೆ. ಠೀವಿಯಿಂದ ಸಿಂಹಾಸನದಲ್ಲಿ ಆಸೀನನಾದ ಅರಸನಿಗೆ ಪರ್ಷಿಯಾದ ರಾಯಭಾರಿ ಉಡುಗೊರೆ ಕೊಡುತ್ತಿದ್ದಾನೆ. ಅರಸರ ಪೋಷಾಕಿನಲ್ಲಿ ವಿಜೃಂಭಿಸುತ್ತಿಲ್ಲವಾದ್ದರಿಂದ ಆತ ಅರಸನಾಗಿರದೇ ಯಾವುದೋ ಸಾಮಂತ ವ್ಯಕ್ತಿಯಾಗಿರಬಹುದು ಎನ್ನುವವರಿದ್ದಾರೆ. ಚಿತ್ರಕಾರರೆಲ್ಲ ಬೌದ್ಧಭಿಕ್ಷುಗಳಾದ್ದರಿಂದ, ಬುದ್ಧನ ಜೀವನ ವೃತ್ತಾಂತಕ್ಕೆ ಸಂಬಂಧಿಸದೇ ಇರುವವರನ್ನೆಲ್ಲ ಆಡಂಬರ ರಹಿತವಾಗಿ ಚಿತ್ರಿಸಲು ಭಿಕ್ಕುಗಳು ಯತ್ನಿಸಿರಬಹುದು. ಇಂತಹದೇ ಸಂದೇಹ ಹಂಪೆಯ ವಿರೂಪಾಕ್ಷ ದೇವಾಲಯದ ಮೆರವಣಿಗೆಯ ಭಿತ್ತಿ ಚಿತ್ರದಲ್ಲಿದೆ. ಪಲ್ಲಕ್ಕಿಯಲ್ಲಿ ಹೊರಟಿರುವವರು, ವಿದ್ಯಾರಣ್ಯರೋ, ವ್ಯಾಸರಾಯರೋ ಎಂಬುದರ ಬಗ್ಗೆ ಭಿನ್ನಾಭಿಪ್ರಾಯವಿದೆ. ಹಿಂದೂರಾಜ ಸುರತ್ರಾಣರ ರಾಯ ದೇಗುಲದಲ್ಲಿ, ಹಿಂದೂ ಸಾಮ್ರಾಜ್ಯ ಸ್ಥಾಪನೆಗೆ ಕಾರಣೀಭೂತರಾದ ವಿದ್ಯಾರಣ್ಯರನ್ನು ಗೌರವ ಸೂಚಕವಾಗಿ ಮೆರವಣಿಗೆಯಲ್ಲಿ ಬರಮಾಡಿಕೊಳ್ಳುವ ಸನ್ನಿವೇಶ ಚಿತ್ರಿತವಾಗಿದ್ದರೆ ಸಹಜವಾದದ್ದೇ. ಲೇಪಾಕ್ಷಿಯ ಪಾಪನಾಶೇಶ್ವರ ದೇವಾಲಯದ ಹೊರಾಂಗಣದ ಮುಚ್ಚಿಗೆಯಲ್ಲಿ ಅದನ್ನು ಕಟ್ಟಿಸಿದ ವೀರಣ್ಣ ಮತ್ತು ವಿರೂಪಣ್ಣ ನಾಯಕರನ್ನು ಚಿತ್ರಿಸಲಾಗಿದೆ. ಗರ್ಭಗುಡಿಯ ಮುಚ್ಚಿಗೆಯಲ್ಲೂ ಈ ಸೋದರರನ್ನು ಭವ್ಯವಾಗಿ ಚಿತ್ರಿಸಲಾಗಿದೆ. ಅವರ ಸಮಕಾಲೀನ ವೇಷ ಭೂಷಣಗಳು ಅತ್ಯಂತ ನೈಜವಾಗಿವೆ. ಕುಸುರಿನ ಕೆಲಸ ಮಾಡಿದ ವೆಲ್ವೆಟ್ ಬಟ್ಟೆಯ ಎತ್ತರವಾದ ಕುಲಾಯಿಗಳು, ಶಿವಭಕ್ತರೆಂದು ಸಾರಲು, ವಿಭೂತಿಯ ಪಟ್ಟೆಗಳು, ಕೊರಳಿಗೆ ಮುತ್ತಿನ ಹಾರಗಳು, ಶುಭ್ರವಾದ 'ಕಬಾಯಿ' ಅಥವಾ ನಿಲುವಂಗಿ, ರೇಶ್ಮೆ ಪಂಚೆ, ನಿಲುವಂಗಿಯ ಮೇಲೆ ಬಿಗಿದುಕೊಂಡ ಚೌಕುಡಿಯ ಪಟ್ಟಿ. ಇದು ಸಾಮಾನ್ಯವಾಗಿ ಪೂಜೆಗೆ ಹೊರಟಾಗ ಅರಸಾಧಿಗಳು ಧರಿಸುವ ಉಡುಗೆಯಾಗಿತ್ತು. ಭರತೇಶ ವೈಭವದಲ್ಲಿ ಮತ್ತು ತೀರ ಇತ್ತೀಚೆಗೆ ಪ್ರಕಟವಾದ "ಕೃಷ್ಣದೇವರಾಯನ ದಿನಚರಿ"ಗಳಲ್ಲಿ ಕುಲಾಯಿ,

ಕಬಯಾಗಳ ಉಲ್ಲೇಖ ಬರುತ್ತದೆ. ಬಹುಶಃ ಮುಸ್ಲಿಂ ವೇಷಭೂಷಣದಿಂದ 'ಕಬಾಯಿ' ಪ್ರೇರಿತವಾಗಿತ್ತು.

ಲೇಪಾಕ್ಷಿ ಬಂಧುಗಳಲ್ಲಿ ಅಣ್ಣನು ಗೌರವರ್ಣದವನಾಗಿದ್ದು ಮೈಕೈ ತುಂಬಿಕೊಂಡಿದ್ದರೆ, ತಮ್ಮನು ಕೃಶಾಂಗನಾಗಿ ಕೃಷ್ಣವರ್ಣದವನಾಗಿರುತ್ತಾನೆ.

ಸೀಬಿಯ ನರಸಿಂಹಸ್ವಾಮಿ ದೇವಾಲಯದ ಮಹಾದ್ವಾರದ ಮುಚ್ಚಿಗೆಯಲ್ಲಿ ಹೊಸಗನ್ನಡದಲ್ಲಿ ಶಾಸನವೊಂದನ್ನು ಬರೆಯಲಾಗಿದೆ.[1] ಇತ್ತೀಚೆಗೆ ಕಟ್ಟಿಸಿದ ಗೋಡೆ ಹಾಗೂ ಸಿಡಿಸಿದ ಸುಣ್ಣದಿಂದಾಗಿ, ಶಾಸನವನ್ನು ಸಂಪೂರ್ಣವಾಗಿ ಓದಲಾಗುತ್ತಿಲ್ಲ. ಅದರಲ್ಲಿ ಮುಖ್ಯವಾಗಿ ಹೈದರಾಲಿಯು ಕೆಳದಿ (ಬಿದನೂರು) ಮೊದಲಾದ ರಾಜ್ಯಗಳನ್ನು ಗೆದ್ದುಕೊಂಡಿದ್ದು, ಪ್ರಜೆಗಳನ್ನು ಮಕ್ಕಳಂತೆ ಪ್ರೀತಿಯಿಂದ ನೋಡಿಕೊಂಡಿದ್ದುದ ಉಲ್ಲೇಖವಿದೆ. 'ಹೈದರ್ ನಾಮಾ' ಬರೆದ ನಲ್ಲಪ್ಪನ ಪೂರ್ವಜರ ವಿವರಗಳು ಉಲ್ಲೇಖಿಸಲ್ಪಟ್ಟಿವೆ. ಅದರ ಕೆಳಗಡೆಯಲ್ಲಿ ತಲೆಗೆ ರುಮಾಲು ಸುತ್ತಿ, ನಿಲುವಂಗಿಯನ್ನು ತೊಟ್ಟು ರಾಜಠೀವಿಯಿಂದ ಆಸನವೊಂದರಲ್ಲಿ ಆರೂಢನಾದ ವ್ಯಕ್ತಿಗೆ ಸೇವಕನೊಬ್ಬನು ಚಾಮರದಿಂದ ಗಾಳಿ ಬೀಸುತ್ತಿದ್ದಾನೆ. ಅವನೊಂದಿಗೆ ಮೂವರು ಸೇವಕರು, ಪ್ರಭುವಿನ ಅಪ್ಪಣೆಯ ನಿರೀಕ್ಷೆಯಲ್ಲಿ ಕೈಕಟ್ಟಿ ನಿಂತಿದ್ದಾರೆ. ರಾಜನ ಎದುರಿಗೆ ರತ್ನಗಂಬಳಿಯ ಮೇಲೆ ಮಂಡಿಯೂರಿ ಕುಳಿತ ಹರೆಯದ ಭವ್ಯವ್ಯಕ್ತಿ ಟೀಪುಸುಲ್ತಾನನೆಂದು, ಇತರ ಚಿತ್ರಗಳ ಹೋಲಿಕೆಯಿಂದ ಗುರುತಿಸಬಹುದು. ಈ ಚಿತ್ರ ಪಟ್ಟಿಯ ಅಡಿಯಲ್ಲಿ ಸೀಬಿಯ ಭಿತ್ತಿ ಚಿತ್ರಗಳಿಗೆ ಕಾರಣೀಭೂತನಾದ ನಲ್ಲಪ್ಪನ ಭಾವಚಿತ್ರವಿದೆ. ತಲೆಗೆ ಪೇಟಾ ಸುತ್ತಿಕೊಂಡು, ಹಣೆಗೆ ಕುಂಕುಮದ ಬಟ್ಟು ಇಟ್ಟುಕೊಂಡು ನಕ್ಷೆ ಇರುವ ಕಸೆ ಬಂಡಿ ಧರಿಸಿದ್ದಾನೆ. ನಲ್ಲಪ್ಪನ ಮೂವರು ಬಂಧುಗಳು, ನೆಲಕ್ಕೆ ಹಾಸಿದ ಆಸನಗಳಲ್ಲಿ ಕುಳಿತು ಅವನೊಡನೆ ವಿಚಾರ ವಿನಿಮಯದಲ್ಲಿ ತೊಡಗಿದ್ದಾರೆ.

ಶ್ರೀರಂಗಪಟ್ಟಣದ ದರಿಯಾ ದೌಲತ್ ಅರಮನೆಯ ಭಿತ್ತಿ ಚಿತ್ರಗಳಲ್ಲಿ ಅನೇಕಾನೇಕ ಐತಿಹಾಸಿಕ ಗಣ್ಯ ವ್ಯಕ್ತಿಗಳನ್ನು ಗುರುತಿಸಬಹುದು. ದ್ವಿತೀಯ ಮೈಸೂರು ಯುದ್ಧವನ್ನು ನಿರೂಪಿಸುವ ಚಿತ್ರದಲ್ಲಿ ಹೈದರಾಲಿಯು ಗಜಾರೂಢನಾಗಿದ್ದಾನೆ. ಅಂಬಾರಿಯಲ್ಲಿದ್ದ ಸೇವಕನು ಪ್ರಭುಗಳಿಗೆ ಛತ್ರ ಹಿಡಿದಿದ್ದಾನೆ. ಆದಾಗಲೇ ರೂಢಿಯಲ್ಲಿ ಬಂದಿದ್ದ ಸೇವಕರ, ಮಾವುತ, ಅಶ್ವ ದಳದವರ ಪಾಶ್ಚಾತ್ಯ ಮಾದರಿಯ ಸಮವಸ್ತ್ರಗಳು ಗಮನಾರ್ಹವಾಗಿವೆ. ಕಾಳಗದ ಸನ್ನಾಹದಲ್ಲಿದ್ದ ಟೀಪುವು ಶ್ವೇತ ಅಶ್ವಾರೂಢನಾಗಿದ್ದರೆ ಆತನೊಡನೆ ವಿಚಾರ ವಿಮರ್ಶೆಯಲ್ಲಿ ತೊಡಗಿದ ಸೇನಾಪತಿಯು ನಾಶೀಪುಡಿ ಬಣ್ಣದ ಕುದುರೆಯನ್ನೇರಿದ್ದಾನೆ. ಕಾಂಚೀಪುರಂ ಯುದ್ಧದ ಅಂಕಣದಲ್ಲಿ ಹೈದರಾಲಿ, ಟೀಪು ಸುಲ್ತಾನರಂತೆ ಚಿಂತಾಕ್ರಾಂತನಾಗಿ ಪಲ್ಲಕ್ಕಿಯಲ್ಲಿದ್ದ ಬ್ರಿಟಿಷ್ ಸೇನಾಧಿಪತಿ ಕರ್ನಲ ಬೇಲಿಯನ್ನೂ ಗುರುತಿಸಬಹುದು. ಇನ್ನಿತರ ಅಂಕಣಗಳಲ್ಲಿ ಚಿತ್ರದುರ್ಗದ ಮದಕರಿನಾಯಕ, ಕೊಡಗಿನ ವೀರರಾಜೇಂದ್ರ, ಕಡಪಾದ ನವಾಬ, ಪೇಶ್ವೆ ಎರಡನೇ ಬಾಜಿರಾಯ ಮುಂತಾದವರನ್ನು ಗುರುತಿಸಬಹುದು.

ಮೈಸೂರು ನಗರದಲ್ಲಿದ್ದ ನರಸಿಂಹಸ್ವಾಮಿ ದೇವಾಲಯದ ಮಹಡಿಯಲ್ಲಿ ಪ್ರತ್ಯೇಕವಾಗಿ ಚಿತ್ರಶಾಲೆಯೊಂದನ್ನು ರಚಿಸಲಾಗಿದೆ. ಪ್ರತಿಯೊಂದು ಪಡಿರೂಪದ ಮೇಲ್ಗಡೆ ಕನ್ನಡದಲ್ಲಿ ಅರಸರ ಹೆಸರುಗಳನ್ನು ನಮೂದಿಸಿರುವದರಿಂದ ಅವರನ್ನು ಗುರುತಿಸಬಹುದು. ಮೊದಲ ನೋಟಕ್ಕೆ ಎಲ್ಲಾ ಅರಸರ ಮುಖಗಳೂ ಏಕ ಪ್ರಕಾರವಾಗಿ ಕಾಣುತ್ತವೆ. ಆಳವಾಗಿ ಅಭ್ಯಸಿಸಿದರೆ, ಅವರ ಶಿರೋಭೂಷಣಗಳು, ಮೀಸೆಯ ವಿನ್ಯಾಸ, ಕಿವಿ, ತುಟಿ, ದವಡೆ ಕಂಠಗಳ ಭೇದ, ಮುಖಚರ್ಯೆ, ಆಭರಣಗಳು ಸಾಕಷ್ಟು ಭಿನ್ನವಾಗಿರುವುದು ಗೋಚರಿಸುವದು. ಅದರಲ್ಲೂ ಕನ್ನಡಿಗರಿಗೆ ಪ್ರಿಯರಾದ ಕಂಠೀರವ ನರಸರಾಜ ಒಡೆಯರ್ (ಕ್ರಿ.ಶ. ೧೭೦೪–೧೭೧೩) ಹಾಗೂ ಬೆಟ್ಟದ ಚಾಮರಾಜ ಒಡೆಯರ (೧೭೭೦-೧೭೭೬) ಅವರ ರೂಪ ಚಹರೆಗಳನ್ನು ಭಿನ್ನವಾಗಿ, ಸ್ಪಷ್ಟವಾಗಿ ವಿಂಗಡಿಸಬಹುದಾಗಿದೆ. ಮೈಸೂರಿನ ಜಗನ್ಮೋಹನ ಅರಮನೆಯ ಚಿತ್ರಶಾಲೆಯಲ್ಲಿ ಅನೇಕಾನೇಕ ಒಡೆಯರು, ರಾಜ-

1 ಎ.ಕ. XII ಸಿರಾ ಸಂ. ೯೮

ಮಹಾರಾಜರ ಜೊತೆಗೆ ಸಮಕಾಲೀನ ಗಣ್ಯ ವ್ಯಕ್ತಿಗಳನ್ನು ಗುರುತಿಸಬಹುದು, ನಮಗೆ ಈಗ ಲಭ್ಯವಿಲ್ಲದ ಆದರೆ ಸಮಕಾಲೀನ ಕಲಾಕಾರರಿಗೆ ಪರಿಚಿತವಿದ್ದ ನೈಜವಾದ ತೈಲಚಿತ್ರಗಳಿಂದ ಈ ಪ್ರತಿ ಚಿತ್ರಗಳನ್ನು ಬರೆದಿರಬಹುದಾದ ಸಾಧ್ಯತೆಯಿದೆ.

ಕರ್ನಾಟಕ ಕರಾವಳಿಗೇ ಸೀಮಿತವಾಗಿರುವ ಕಾವಿ ಚಿತ್ರಗಳಲ್ಲಿ ಮಧ್ವಾಚಾರ್ಯರು, ಸಂತರಾಮದಾಸ, ತುಕಾರಾಮರಂಥವರನ್ನು ಪಡಿ ಚಿತ್ರಗಳಿಂದ ಚಿತ್ರಿಸಿದ್ದನ್ನು ಗುರುತಿಸಬಹುದು. ಇನ್ನಿತರ ಸಾಮಯಿಕ ವ್ಯಕ್ತಿಗಳ ಚಿತ್ರಗಳಿದ್ದರೂ ಗುರುತಿಸುವದು ಕಷ್ಟ !

ನಮ್ಮ ಚರಿತ್ರೆಯ ಪಠ್ಯ ಪುಸ್ತಕಗಳಲ್ಲಿ ಹೀಗೆ ಲಭ್ಯವಿರುವ ಕೆಲವು ಐತಿಹಾಸಿಕ ಚಿತ್ರಗಳನ್ನಾದರೂ ಸೇರಿಸುವ ಔದಾರ್ಯವನ್ನು ಸರಕಾರ ಮತ್ತು ಸಂಸ್ಥೆಗಳು ತೋರಿದಲ್ಲಿ ಕೆಲವಾದರೂ ಚಿರಸ್ಮರಣೀಯರ ಚಿತ್ರಗಳು ಎಳೆಯರ ಮನಸ್ಸಿನಲ್ಲಿ ಉಳಿದುಕೊಂಡಾವು. ನನ್ನ ವಿದ್ಯಾರ್ಥಿಜೀವನದ ದಿನಗಳಿಂದಲೂ ಪಠ್ಯಕ್ಕೆ ಅರ್ಥಾತ್ ಸಂಬಂಧವಿಲ್ಲದ್ದ ಚಿತ್ರಗಳನ್ನು ನೋಡುತ್ತ ಬಂದಿದ್ದೇನೆ. ನೂರಜಹಾನ್, ಹೈದರಾಲಿ, ಟಿಪ್ಪುಸುಲ್ತಾನರ ಚಿತ್ರಗಳು ಅವರ ವ್ಯಕ್ತಿತ್ವದ ಚಿತ್ರಣ ಕೊಡುತ್ತಿರುವುದಿಲ್ಲ. ಈ ದೃಷ್ಟಿಯಿಂದ ಇಲ್ಲಿ ಪ್ರಸ್ತಾಪಿಸಲಾದ ಚಿತ್ರಗಳಿಗೆ ಚಾರಿತ್ರಿಕ ಮಹತ್ವವಿದೆ. ○

## ಆಧಾರ ಗ್ರಂಥಗಳು

ಎಂ.ಎ.ಆರ್. ೧೯೩೩ ಮತ್ತು ಎಪಿಗ್ರಾಫಿಯಾ ಕರ್ನಾಟಕ, xii ಸಿರಾ. ೯೮